ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:31.12.2003ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.220

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಪೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ:2/ಸಂ.ವಿ/ಸಿ.ಓ.ಪಿ/2004, ದಿನಾಂಕ:16ನೇ ಜನವರಿ, 2004**

ಬೆಂಗಳೂರು ನಗರ, ಶಿವಾಜಿನಗರ ಸಂಚಾರ ವಲಯ ವ್ಯಾಪ್ತಿಯಲ್ಲಿ ಬರುವ ಜುಮ್ಮಾ ಮಸೀದಿ ರಸ್ತೆಯು (ಓ.ಪಿ.ಹೆಚ್ ರಸ್ತೆ) ಮುಖ್ಯವಾದ ರಸ್ತೆಯಾಗಿದ್ದು ರಸ್ತೆಯ ಎರಡೂ ಬದಿಗಳಲ್ಲಿ ವಾಣಿಜ್ಯ ಮಳಿಗೆಗಳಿರುತ್ತವೆ. ಈ ರಸ್ತೆಯು ಹೈನ್ಸ್ ವೃತ್ತದಿಂದ ಕಮರ್ಷಿಯಲ್ ಸ್ಟ್ರೀಟ್ ಆಸ್ಪತ್ರೆ ರಸ್ತೆಯವರೆಗೆ ಇದ್ದು ಸುಮಾರು 1 ಕಿ.ಮೀ ಉದ್ದವಿರುತ್ತದೆ. ಸದರಿ ರಸ್ತೆಯ ಎರಡೂ ಬದಿಯಲ್ಲಿ ಪ್ರಾರ್ಥನಾ ಮಂದಿರಗಳು, ಪ್ರಖ್ಯಾತ ಸೆಂಟ್ ಮೇರಿಸ್ ಚರ್ಚ್, ರಸೂಲ್ ಮಾರುಕಟ್ಟೆ ಹಾಗೂ ರಸ್ತೆಗೆ ಹೊಂದಿಕೊಂಡಂತೆ ಕಮರ್ಷಿಯಲ್ ಸ್ಟ್ರೀಟ್ ಇರುವುದರಿಂದ ಹೆಚ್ಚಿನ ವಾಹನ ಸಂಚಾರ ಹಾಗೂ ಪಾದಚಾರಿಗಳ ಓಡಾಟವಿರುತ್ತದೆ. ಇದರಿಂದಾಗಿ ಸದರಿ ರಸ್ತೆಯಲ್ಲಿ ಓಡಾಡುವ ವಯೋವೃದ್ಧರಿಗೆ ಮತ್ತು ಶಾಲಾಮಕ್ಕಳಿಗೆ ಬಹಳ ಅಡಚಣೆಯಾಗುತ್ತಿದೆ.

ಜುಮ್ಮಾ ಮಸೀದಿ ರಸ್ತೆ (ಓ.ಪಿ.ಹೆಚ್ ರಸ್ತೆ) ಯಲ್ಲಿ ಹೆಚ್ಚಿನ ವಾಹನ ಸಂಚಾರ ಮತ್ತು ಪಾದಚಾರಿಗಳ ಓಡಾಟವಿರುವುದರಿಂದ ಸುಗಮ ಸಂಚಾರಕ್ಕಾಗಿ ಹಾಗೂ ಸಾರ್ವಜನಿಕರ ಹಿತದೃಷ್ಟಿಯಿಂದ ಸದರಿ ರಸ್ತೆಯಲ್ಲಿ ದಕ್ಷಿಣ ದಿಕ್ಕಿನ ತಾಜ್ ವೃತ್ತದಿಂದ ಉತ್ತರ ದಿಕ್ಕಿನ ಭಂಡಾರಿ ಜ್ಯೂಯಲರ್ಸ್ ಜಂಕ್ಷನ್ ವರೆಗೂ "ಏಕ ಮುಖ ಸಂಚಾರ" ವ್ಯವಸ್ಥೆ ಮಾಡುವುದು ಅತ್ಯವಶ್ಯಕವಾಗಿದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

"ಜುಮ್ಮಾ ಮಸೀದಿ ರಸ್ತೆ (ಓ.ಪಿ.ಹೆಚ್ ರಸ್ತೆ) ಯಲ್ಲಿ ದಕ್ಷಿಣ ದಿಕ್ಕಿನ ತಾಜ್ ವೃತ್ತದಿಂದ ಉತ್ತರ ದಿಕ್ಕಿನ ಭಂಡಾರಿ ಜ್ಯೂಯಲರ್ಸ್ ವೃತ್ತದ ವರೆಗೆ ಎಲ್ಲಾ ವಿಧವಾದ ವಾಹನ ಸಂಚಾರವನ್ನು ನಿಷೇಧಿಸಲಾಗಿದೆ".

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂದನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:07.01.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:16.01.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

ಪಿ.ಆರ್.221

## ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಪೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ:1/ಸಂ.ವಿ/ಸಿ.ಓ.ಪಿ/2004, ದಿನಾಂಕ:14ನೇ ಜನವರಿ, 2004**

ಬೆಂಗಳೂರು ನಗರ, ಶಿವಾಜಿನಗರ ಸಂಚಾರ ವಲಯ ವ್ಯಾಪ್ತಿಯಲ್ಲಿ ಬರುವ ಸೆಂಟ್ ಜಾನ್ಸ್ ರಸ್ತೆಯು ಸುಮಾರು 1 ಕಿ.ಮೀ. ಉದ್ದವಿರುತ್ತದೆ. ಈ ರಸ್ತೆಯಲ್ಲಿ ಎರಡೂ ಬದಿಯಿಂದಲೂ ವಾಹನ ಸಂಚಾರ ಅಧಿಕವಿದ್ದು, ನಾಗ ಚಿತ್ರಮಂದಿರ, ಲಾವಣ್ಯ ಚಿತ್ರಮಂದಿರ, ಅಜಂತಾ ಚಿತ್ರಮಂದಿರ, ಆರ್.ಬಿ.ಎ.ಎನ್.ಎಂ.ಎಸ್. ಶಾಲೆ ಮತ್ತು ಕಾಲೇಜುಗಳು ಸಹ ಇವೆ. ಸದರಿ ರಸ್ತೆಯ ಪೂರ್ವ ಭಾಗದಲ್ಲಿ ಆರ್.ಬಿ.ಎ.ಎನ್.ಎಂ.ಎಸ್. ಮೈದಾನವಿದ್ದು ವರ್ಷದ ಎಲ್ಲಾ ದಿನಗಳಲ್ಲಿ ಪ್ರದರ್ಶನ ಮತ್ತು ಇತರೆ ಕಾರ್ಯಕ್ರಮಗಳು ಸಹ ನಡೆಯುತ್ತಿರುತ್ತವೆ. ಸದರಿ ಮೈದಾನಕ್ಕೆ ನಡೆಯುವ ಎಲ್ಲಾ ಕಾರ್ಯಕ್ರಮಗಳಿಗೆ ಹೆಚ್ಚಿನ ವಾಹನ ಸವಾರರು ಮತ್ತು ಚಾಲಕರು ಸೆಂಟ್ ಜಾನ್ಸ್ ರಸ್ತೆಯನ್ನೇ ಬಳಸಬೇಕಾಗುವುದರಿಂದ ಸುಗಮ ಸಂಚಾರ ಮತ್ತು ಪಾದಚಾರಿಗಳ ಓಡಾಟಕ್ಕೆ ಸತತವಾಗಿ ಅಡಚಣೆವುಂಟಾಗುತ್ತಿರುತ್ತದೆ.

ಸೆಂಟ್ ಜಾನ್ಸ್ ರಸ್ತೆಯಲ್ಲಿ ಅಧಿಕ ವಾಹನ ಸಂಚಾರ ಮತ್ತು ಪಾದಚಾರಿಗಳ ಓಡಾಟವಿರುವುದರಿಂದ, ಸುಗಮ ಸಂಚಾರ ಮತ್ತು ಸಾರ್ವಜನಿಕರ ಹಿತದೃಷ್ಟಿಯಿಂದ ಸದರಿ ರಸ್ತೆಯಲ್ಲಿ ವೀರಪಿಳ್ಳೆ ಸ್ಟ್ರೀಟ್ ರಸ್ತೆ ಸೇರುವ ಜಂಕ್ಷನ್‌ನಿಂದ ಡಿಕನ್‌ಸನ್ ರಸ್ತೆ ಜಂಕ್ಷನ್ ವರೆಗೆ ಏಕಮುಖ ಸಂಚಾರ ವ್ಯವಸ್ಥೆಯನ್ನು ಮಾಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂದನೆಗಳನ್ನು ಆದೇಶಿಸಿರುತ್ತೇನೆ.

"ಸೆಂಟ್‌ಜಾನ್ಸ್ ರಸ್ತೆಯಲ್ಲಿ ಉತ್ತರ ದಿಕ್ಕಿನ ವೀರಪಿಳ್ಳೆ ಸ್ಟ್ರೀಟ್ ರಸ್ತೆ ಕೂಡುವ ಜಂಕ್ಷನ್‌ನಿಂದ ದಕ್ಷಿಣ ದಿಕ್ಕಿನ ಡಿಕನ್‌ಸನ್ ರಸ್ತೆ ಜಂಕ್ಷನ್‌ವರೆಗೆ ಎಲ್ಲಾ ವಿಧವಾದ ವಾಹನ ಸಂಚಾರವನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಭಂದನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:07.01.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:14.01.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

ಎಸ್. ಮರಿಸ್ವಾಮಿ
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

ಪಿ.ಆರ್.222

**IN THE COURT OF THE ADDITIONAL REGISTRAR OF CO-OPERATIVE SOCIETIES (CONSUMERS AND MARKETING), BANGALORE-560 052, OFFICE OF THE REGISTRAR OF CO-OPERATIVE SOCIETIES, NO.1, ALI ASKAR ROAD, BANGALORE-52**

**DISPUTE No. AC/M/DDS/D2/5856/2003-2004**

| **Petitioner** | **V/s** | **Respondents** |
|---|---|---|
| Managing Director,<br>Malanadu Arecanut Marketing<br>Co-operative Society Ltd, (MAMCOS)<br>Shimoga, Post Box No.13,<br>A.P.M.C. Yard,<br>Shimoga. | | 1. M/s Sri Annapoorna,<br>Arecanut Trader's Areca<br>Merchants, A.P.M.C. Yard,<br>Shimoga by its partner<br>Sri H.T. Satish.<br>2. Sri H.T. Satish,<br>S/o Thimmappa Gowda,<br>Partner,<br>Sri Annapoorna Arecanut<br>Traders Areca Merchants,<br>A.P.M.C. Yard, Shimoga.<br>3. Sri H.T. Vijayendra,<br>S/o Thimmappa Gowda,<br>Partner,<br>Sri Annapoorna Arecanut<br>Traders, Areca Merchants,<br>A.P.M.C. Yard, Shimoga. |

**NOTICE OF CONFIRMATION OF ATTACHMENT OF IMMOVABLE PROPERTIES UNDER SECTION 103(2) OF THE KARNATAKA CO-OPERATIVE SOCIETIES ACT, 1959**

1. Whereas, the Petitioner society has filed the above dispute before me under section 70 of the Karnataka Co-operative Societies Act, 1959 for recovery of a sum of Rs.50,08,875.85 alongwith future interest at 17% on the principal amount from 01.10.2003 till the date of realisation from the Respondents. The dispute is taken on file under Dispute No.A(C/M)DDS/D2/5856/2003-04.
2. Whereas it is brought to my notice by the Petitioner society by an application filed under section 103 of the Karnataka Co-operative Societies Act, 1959 that the Respondents are contemplating to convey or alienate or dispose the immovable properties belonging to the Respondent mentioned in the Schedule hereunder, with the intent to delay the enforcement or execution of any award or order that may be passed in the above dispute against them.
3. Whereas the Petitioner society has further stated that if the Respondents are not prevented from doing so, the petitioner society will be left with no means to recover the amount even if any award/decree is obtained against the Respondents.
4. Whereas, I am fully convinced that the disposal of schedule property of the Respondent would defeat or delay the enforcement or execution of any order/decree that may be passed against the Respondents.
5. Hence, I ordered to issue the notice on 09.12.2003 to the person's concerned and to the person's interested in purchasing or acquiring the properties.

Further it is informed to the Respondents that if they desire to have the conditional attachment raised, they should furnish cash security to the extent of Rs. 50,10,000.00 by depositing the said amount in the petitioner co-operative society under Suspense Account and produce the original receipt/challan issued thereon to this office on or before 12.01.2004 without fail.

If they fail to furnish the cash security as ordered above within the stipulated period, this conditional attachment will be confirmed as made absolute.

After the completion of said period the case is taken for hearing on 12.01.2004 as it seen from the record that the Notices were duly served on the parties. But neither the respondent nor the interested person's have complied the orders of the Court and also the Respondent No.2, who has appeared in person on the hearing date has stated that he has no objection. Therefore it is held that the Respondent's are not interested in raising the attachment order hence I pass the following order.

**ORDER**

The notice of conditional attachment dated:09.12.2003 is hereby confirmed as made absolute the Schedule of property shown therein is attached.

Given under my hand and seal this the 12th day of January, 2004.

Additional Registrar of C.S.,
(Consumer and Marketing)
Bangalore.

PR-223

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಎ5.ಎಸ್‌ಡಿಎಲ್.ಎಸ್‌ಜಡ್.ಸಿಆರ್:98:2002-03, ದಿನಾಂಕ:7ನೇ ಫೆಬ್ರವರಿ, 2004**

**ಉಪಸ್ಥಿತರು:ಎನ್.ಎಲ್. ಶಾಂತಕುಮಾರ್, ಭಾಅಸೇ,**

**ಫಿರ್ಯಾದುದಾರರು** : ಬಿ. ರಾಮಚಂದ್ರಪ್ಪ,
ಆರಕ್ಷಕ ವೃತ್ತ ನಿರೀಕ್ಷಕರು, ಹೊಸಕೋಟೆ ವೃತ್ತ,
ಹೊಸಕೋಟೆ.

**ವಿರುದ್ಧ**

**ಅರ್ಜಿದಾರರು** : ಶ್ರೀಮತಿ ಎಂ.ಎಂ. ಉಮಾದೇವಿ,
ವೈಫಾಫ್ ವಿ. ಪಿಳ್ಳಣ್ಣ,
ನಂ.10, ಪಾಪಯ್ಯ ಬಿಲ್ಡಿಂಗ್,
ದೇವಸಂದ್ರ, ಕೆ.ಆರ್. ಪುರಂ,
ಬೆಂಗಳೂರು-560 036.

**1. ಪ್ರಕರಣದ ಸಾರಾಂಶ:**

ದಿನಾಂಕ:23.10.2002 ರಂದು ಹೊಸಕೋಟೆ ತಾಲ್ಲೂಕು ನಂದಗುಡಿ ಹೋಬಳಿ ಬಾಣಮಾಕನಹಳ್ಳಿ-ಬೈಲನರಸಾಪುರ ಗ್ರಾಮಕ್ಕೆ ಹೋಗುವ ರಸ್ತೆಯ ಮಾರ್ಸಂಡಹಳ್ಳಿಗೆ ಹೋಗುವ ರಸ್ತೆಯ ತಿರುವಿನಲ್ಲಿ ಫಿರ್ಯಾದುದಾರರಿಗೆ ಖಚಿತವಾಗಿ ಬಂದ ವರ್ತಮಾನದ ಮೇರೆಗೆ ಸದರಿಯವರು ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ತಮ್ಮ ಸರ್ಕಾರಿ ಜೀಪಿನಲ್ಲಿ ಘಟನಾ ಸ್ಥಳಕ್ಕೆ ಹೋಗಿ ರಸ್ತೆಯ ಕಾವಲು ಮಾಡುತ್ತಿರಬೇಕಾದರೆ ಮಧ್ಯಾಹ್ನ 3.00 ರ ಸಮಯದಲ್ಲಿ ಬಾಣಮಾಕನಹಳ್ಳಿಯ ಕಡೆಯಿಂದ ನೀಲಿ ಬಣ್ಣದ 407 ಟೆಂಪೋ ಬಂದಿದ್ದು ಅದನ್ನು ಫಿರ್ಯಾದುದಾರರು ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಅಡ್ಡಹಾಕಿ ತಡೆದು ನಿಲ್ಲಿಸಿದಾಗ ಟೆಂಪೋದಲ್ಲಿದ್ದ ಕೆಲವರು ಇಳಿದು ಓಡಿ ಹೋಗಿದ್ದು ಅವರ ಪೈಕಿ ಟೆಂಪೋದಲ್ಲಿದ್ದ 7 ಜನರು ಮಾತ್ರ ಪೊಲೀಸಿನವರಿಗೆ ಸಿಕ್ಕಿದ್ದು ಸದರಿಯವರ ಹೆಸರು ಹಾಗೂ ವಿಳಾಸಗಳನ್ನು ವಿಚಾರಿಸಿದಾಗ ಸದರಿ ವಾಹನದಲ್ಲಿ ಏನು ಇದೆ ಅಂತ ವಿಚಾರಿಸಲಾಗಿ ವಾಹನದಲ್ಲಿ ಆರೋಪಿಗಳು ಹಿಂದಿನ ದಿನ ಅತ್ತಿಘಟ್ಟ ಸರ್ಕಾರಿ ಅರಣ್ಯದಲ್ಲಿ ಬೆಳೆಸಿರುವ ಶ್ರೀಗಂಧದ ಗಿಡಗಳನ್ನು ಈ ಹಿಂದೆ ಯಾರೋ ಕಳ್ಳತನದಲ್ಲಿ ಕಡಿದು, ಆ ರೀತಿ ಕಡಿದ ಮರದ ತುಂಡುಗಳನ್ನು ಅರಣ್ಯದಲ್ಲಿ ಬಚ್ಚಿಟ್ಟಿದ್ದು ಅವುಗಳನ್ನು ಸಾಗಾಣಿಕೆ ಮಾಡಲು 1ನೇ ಆರೋಪಿ ಸಾದಿಕ್ ಆಶೀಫ್ ಈತ ಇತರೆ 10 ಆರೋಪಿಗಳೊಂದಿಗೆ ಅರ್ಜಿದಾರ ಟೆಂಪೋ ವಾಹನ ನೋಂದಣಿ ಸಂಖ್ಯೆ:ಕೆಎ03-6121 ನೇದರಲ್ಲಿ ಕಳ್ಳತನದಿಂದ ಸಾಗಾಣಿಕೆ ಮಾಡುತ್ತಿದ್ದಾಗ ಅದನ್ನು ಫಿರ್ಯಾದುದಾರರು ಪತ್ತೆಹಚ್ಚಿ ತಮ್ಮ ಸಿಬ್ಬಂದಿ ಹಾಗೂ ಪಂಚರ ಸಮಕ್ಷಮ ಸ್ಥಳದಲ್ಲೇ ಮಹಜರ್ ಕ್ರಮ ಜರುಗಿಸಿ ವಾಹನವನ್ನು ಶ್ರೀಗಂಧದ ಮರದ ಹಸಿ ತುಂಡುಗಳ ಸಮೇತ ವಶಪಡಿಸಿಕೊಂಡು ತದನಂತರ ಸದರಿಯವರು ಸರ್ಕಾರದ ಪರವಾಗಿ ಕೊಟ್ಟ ದೂರನ್ನು ನಂದಗುಡಿ ಪೊಲೀಸರು ಅವರ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:199:2002 ಕರ್ನಾಟಕ ಅರಣ್ಯ ಕಾಯ್ದೆ ಕಲಂ 86, 87 ಹಾಗೂ ಭಾರತೀಯ ದಂಡ ಸಂಹಿತೆ ಕಲಂ 379ರ ಕೆಳಗೆ ನೊಂದಾಯಿಸಿಕೊಂಡಿದ್ದು ಇರುತ್ತದೆ. ವಾಹನದೊಂದಿಗೆ ಸಿಕ್ಕ 7 ಆರೋಪಿಗಳನ್ನು ಪೊಲೀಸರು ಬಂಧಿಸಿ ಸಂಬಂಧಿಸಿದ ನ್ಯಾಯಾಲಯಕ್ಕೆ ನ್ಯಾಯಾಂಗ ರಿಮ್ಯಾಂಡ್ ಅರ್ಜಿಯೊಂದಿಗೆ ಒಪ್ಪಿಸಿದ್ದು ಇರುತ್ತದೆ.

ಈ ರೀತಿ ಫಿರ್ಯಾದುದಾರರು ಅರ್ಜಿದಾರರ ವಾಹನದಲ್ಲಿ ಆರೋಪಿಗಳಿಂದ ಶ್ರೀಗಂಧದ ಹಸಿ ಮರದ ತುಂಡುಗಳು ಹಾಗೂ ಚಕ್ಕೆಗಳು ಸಾಗಾಣಿಕೆಯಾಗುತ್ತಿದ್ದ ಒಟ್ಟು ತೂಕ 155 ಕೆ.ಜಿ. ಇದ್ದು ಅವುಗಳನ್ನು ಮತ್ತು ವಾಹನವನ್ನು ನಂದಗುಡಿ ಪೊಲೀಸರಿಂದ ಹೊಸಕೋಟೆ ವಲಯ ಅರಣ್ಯಾಧಿಕಾರಿಗಳು ಪಡೆದುಕೊಂಡು ಅವುಗಳನ್ನು ನ್ಯಾಯಾಲಯದ ಆದೇಶದ ಮೇರೆಗೆ ಅರಣ್ಯ ಇಲಾಖೆಗೆ ಒಪ್ಪಿಸಿದ್ದನ್ನು ಸ್ವೀಕರಿಸಿ ಸದರಿಯವರು ಪ್ರಾಧಿಕಾರಕ್ಕೆ ಪ್ರಕರಣದ ಎಫ್‌ಐಆರ್, ಮಹಜರ್ ಹಾಗೂ ಪಿಎಫ್ ನೇದ್ದರ ನಕಲುಗಳನ್ನು ಪೂರೈಸಿ ದಿನಾಂಕ:20.11.2002 ರಂದು ಪ್ರಾಧಿಕಾರಕ್ಕೆ ಪತ್ರ ಬರೆದುಕೊಂಡಿರುತ್ತಾರೆ.

ಇದಕ್ಕೂ ಮುಂಚಿತವಾಗಿ ದಿನಾಂಕ:08.11.2002 ರಂದು ಅರ್ಜಿದಾರರು ತಮ್ಮ ನ್ಯಾಯವಾದಿಗಳ ಮುಖಾಂತರ ಪ್ರಾಧಿಕಾರಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ನೀಡಬೇಕು ಅಂತಾ ವಿನಂತಿಸಿದ್ದರು. ಸದರಿ ಅರ್ಜಿಗೆ ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಿವರವಾದ ತಕರಾರುಗಳನ್ನು ದಿನಾಂಕ:07.12.2002ರಂದು ಸಲ್ಲಿಸಿರುತ್ತಾರೆ.

ದಿನಾಂಕ:28.11.2002 ರಂದು ಪ್ರಾಧಿಕಾರವು ಅರ್ಜಿದಾರರಿಗೆ ಕರ್ನಾಟಕ ಅರಣ್ಯ ಕಾಯ್ದೆ ಕಲಂ 71ಬಿ ರ ಪ್ರಕಾರ ಕಾರಣಕೇಳುವ ನೋಟೀಸನ್ನು ನೀಡಿ ಸದರಿಯವರ ವಾಹನದಲ್ಲಿ ಶ್ರೀಗಂಧದ ಕಳ್ಳಸಾಗಾಣಿಕೆಯಾಗಿದ್ದರಿಂದ ಅದನ್ನು ಏಕೆ ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ನೋಟೀಸನ್ನು ನೀಡಲಾಗಿತ್ತು. ಪ್ರಾಧಿಕಾರದ ಸದರಿ ನೋಟೀಸಿಗೆ ಅರ್ಜಿದಾರರ ನ್ಯಾಯವಾದಿಗಳು ತಮ್ಮ ವಿವರವಾದ ತಕರಾರುಗಳನ್ನು ದಿನಾಂಕ:18.01.2003ರಂದು ಸಲ್ಲಿಸಿರುತ್ತಾರೆ.

ತದನಂತರ ಪ್ರಾಧಿಕಾರವು ಮುಟ್ಟುಗೋಲು ಪ್ರಕರಣದ ಬಗ್ಗೆ ವಿವಿಧ ದಿನಾಂಕಗಳನ್ನು ವಿಚಾರಣೆಗೆ ಅಂತಾ ಗೊತ್ತುಪಡಿಸಿದ್ದು, ವಿಚಾರಣೆಯಲ್ಲಿ ಅಭಿಯೋಜನವು 5 ಸಾಕ್ಷಿಗಳನ್ನು ವಿಚಾರಿಸಿಕೊಂಡು ಎರಡು ದಾಖಲಾತಿಗಳನ್ನು ತನ್ನ ಪರವಾಗಿ ನಿಶಾನಿಸಿಕೊಂಡಿರುತ್ತದೆ. ಅರ್ಜಿದಾರರು ತಮ್ಮ ಪರ ಯಾವುದೇ ಸಾಕ್ಷಿಯನ್ನು ಹಾಜರುಪಡಿಸಿರುವುದಿಲ್ಲ.

ಅರ್ಜಿದಾರರ ನ್ಯಾಯವಾದಿಗಳು ಹಾಗೂ ಎ.ಡಿ.ಪಿ.ಯವರು ತಮ್ಮ ವಾದಗಳನ್ನು ಮಂಡಿಸಿದ್ದು, ಪ್ರಾಧಿಕಾರವು ಇದರಲ್ಲಿ ಈ ಮೇಲೆ ಹೇಳಿದಂತೆ ದಿನಾಂಕ:23.10.2002ರಂದು ಅರ್ಜಿದಾರರ 407 ಟೆಂಪೋ ನಂಬರ್ ಕೆಎ03-6121 ನೇದರಲ್ಲಿ ಆರೋಪಿಗಳು ಶ್ರೀಗಂಧದ ಹಸಿಮರದ ತುಂಡುಗಳನ್ನು ಕಳ್ಳತನದಿಂದ ಸಾಗಾಣಿಕೆ ಮಾಡುತ್ತಿದ್ದರೋ ಹೇಗೆ ಮತ್ತು ಅದನ್ನು ತಪ್ಪಿಸಲು ಅರ್ಜಿದಾರಳು ಯಾವ ಕ್ರಮವನ್ನು ತೆಗೆದುಕೊಂಡಿರುತ್ತಾಳೆ ಮತ್ತು ಅಭಿಯೋಜನದ ಸಾಕ್ಷ್ಯಾಧಾರಗಳನ್ನು ಅಲ್ಲಗೆಳೆಯಲು ಅರ್ಜಿದಾರಳು ತನ್ನ ಪರ ಯಾವ ರೀತಿಯ ಸಾಕ್ಷಿಯನ್ನು ಒದಗಿಸಿದ್ದಾಳೆ ಹಾಗೂ ಅರ್ಜಿದಾರಳ ವಾಹನವು ಮುಟ್ಟುಗೋಲು ಹಾಕಿಕೊಳ್ಳಲು ಅರ್ಹವಿದೆಯೋ ಹೇಗೆ ಎಂಬ ಅಂಶಗಳನ್ನು ನಾನು ಇದರಲ್ಲಿ ಇತ್ಯರ್ಥಪಡಿಸಬೇಕಾಗಿರುತ್ತದೆ.

ಈ ಮೇಲಿನ ಸಾಕ್ಷ್ಯಾಧಾರಗಳನ್ನು ಹಾಗೂ ಉಭಯತರ ವಾದಗಳನ್ನು ಕೇಳಿದಾಗ ಫಿರ್ಯಾದುದಾರರು ದಿನಾಂಕ:23.10.2002ರಂದು ಆರೋಪಿಗಳು ಅರ್ಜಿದಾರಳ ಟೆಂಪೋ ವಾಹನ ಸಂಖ್ಯೆ: ಕೆಎ03-6121 ನೇದರಲ್ಲಿ ಹಸಿ ಶ್ರೀಗಂಧದ ಮರದ ತುಂಡುಗಳನ್ನು ಕಳ್ಳತನದಿಂದ ಸಾಗಾಣಿಕೆ ಮಾಡುತ್ತಿದ್ದರು. ಅದನ್ನು ತಪ್ಪಿಸಲು ವಾಹನ ಮಾಲೀಕ-ಅರ್ಜಿದಾರಳು ಯಾವುದೇ ಕ್ರಮವನ್ನು ತೆಗೆದುಕೊಂಡಿರುವುದಿಲ್ಲ, ಅಭಿಯೋಜನದ ಸಾಕ್ಷಿಯನ್ನು ಅಲ್ಲಗೆಳೆಯಲು ತನ್ನ ಪರ ಯಾವುದೇ ಸಾಕ್ಷಿಯನ್ನು ನೀಡದ್ದರಿಂದ ಫಿರ್ಯಾದುದಾರರು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಅರ್ಜಿದಾರಳ ವಾಹನ ಹಾಗೂ ಶ್ರೀಗಂಧವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅರ್ಹವಾಗಿರುತ್ತದೆ ಅಂತಾ ತೀರ್ಮಾನಿಸಿ ಅದಕ್ಕೆ ಈ ಕೆಳಕಂಡ ಕಾರಣಗಳನ್ನು ನೀಡಬಯಸುತ್ತೇನೆ.

**ಕಾರಣಗಳು**

ಪ್ರಾ.ಸ.1 ಫಿರ್ಯಾದಿ ಇದ್ದು ಸದರಿಯವರು ತಮ್ಮ ಸಾಕ್ಷಿಯಲ್ಲಿ ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಧಾವಿಸಿ ಘಟನಾ ಸ್ಥಳದಲ್ಲಿ ಟೆಂಪೋ ನಂಬರ್ ಕೆಎ03-6121 ನೇದರಲ್ಲಿ ಆರೋಪಿಗಳು ಶ್ರೀಗಂಧದ ಮರದ ತುಂಡುಗಳನ್ನು ಕಳ್ಳತನದಿಂದ ಸಾಗಾಣಿಕೆಯಾಗುತ್ತಿದ್ದುದನ್ನು ಪತ್ತೆಹಚ್ಚಿ ಆರೋಪಿಗಳನ್ನು ಬಂಧಿಸಿ ಸ್ಥಳದಲ್ಲೆ ವಾಹನ ಹಾಗೂ ಶ್ರೀಗಂಧದ ಮರದ ತುಂಡುಗಳನ್ನು ವಶಪಡಿಸಿಕೊಂಡು ಮಹಜರ್ ಕ್ರಮ ಸ್ಥಳದಲ್ಲೆ ಜರುಗಿಸಿದ್ದಾಗಿ ತಮ್ಮ ವಿವರವಾದ ಸಾಕ್ಷಿ ನುಡಿದಿದ್ದು, ಇವರ ಸಾಕ್ಷಿಯಲ್ಲಿ ಮಹಜರ್‌ನ್ನು ನಿಶಾನೆ-ಪಿ1 ಅಂತಾ ಗುರ್ತಿಸಲಾಗಿರುತ್ತದೆ. ಅದೇ ರೀತಿ ಸದರಿ ಸಾಕ್ಷಿಯ ಮರು ವಿಚಾರಣೆಯಲ್ಲಿ ದೋಷಾರೋಪಣಾ ಪಟ್ಟಿಯನ್ನು ನಿಶಾನೆ-ಪಿ2 ಅಂತಾ ಗುರ್ತಿಸಲಾಗಿರುತ್ತದೆ. ಪ್ರಾ.ಸ.2 ಹಾಗೂ 3ರವರು ಮಹಜರ್ ಸಾಕ್ಷಿಗಳಾಗಿದ್ದು, ಪ್ರಾ.ಸ 1ರ ಸಾಕ್ಷಿ ಹಾಗೂ ನಿಶಾನೆ ಪಿ1ರ ಮಹಜರಕ್ಕೆ ಅನುಗುಣವಾಗಿ ಸಾಕ್ಷಿ ನುಡಿದು ಫಿರ್ಯಾದುದಾರರು ಘಟನಾ ಸ್ಥಳದಲ್ಲಿ ಅವರುಗಳ ಎದುರಿನಲ್ಲಿ ಟೆಂಪೋದಿಂದ ಶ್ರೀಗಂಧದ ಮರದ ತುಂಡುಗಳನ್ನು ವಶಪಡಿಸಿಕೊಂಡ ಬಗ್ಗೆ ಸಾಕ್ಷಿ ನುಡಿದಿರುತ್ತಾರೆ. ಅದೇ ರೀತಿ ಪ್ರಾ.ಸ.4ನ್ನು ಕೂಡ ಇನ್ನೊರ್ವ ಮಹಜರ್ ಸಾಕ್ಷಿಯಾಗಿದ್ದು, ಈತನು ಕೂಡ ಪ್ರಾ.ಸ. 1 ರಿಂದ 4 ರ ಸಾಕ್ಷಿಯನ್ನು ಪುಷ್ಟೀಕರಿಸಿದ್ದಾನೆ. ಪ್ರಾ.ಸ 5 ಆರೋಪಿಗಳ ಮೇಲೆ ದೋಷಾರೋಪಣಾ ಪಟ್ಟಿ ಸಲ್ಲಿಸಿದ ತನಿಖಾಧಿಕಾರಿಯಾಗಿದ್ದು, ಈತನನ್ನು ಅರ್ಜಿದಾರಳ ನ್ಯಾಯವಾದಿಗಳು ಪಾಟೀ ಸವಾಲು ಮಾಡಿರುವುದಿಲ್ಲ. ಪ್ರಾ.ಸ.1 ರಿಂದ 4 ರವರುಗಳ ಪಾಟೀ ಸವಾಲುಗಳನ್ನು ಕೂಡ ಪರಿಶೀಲಿಸಲಾಗಿ ಸದರಿ ಸಾಕ್ಷಿಗಳು ನಂಬಲು ಅನರ್ಹವಾದ ಅಂಶಗಳನ್ನು ನುಡಿದ ಬಗ್ಗೆ ಯಾವುದೇ ಅಂಶಗಳನ್ನು ಒದಗಿಸಿರುವುದಿಲ್ಲ. ಈ ಕಾರಣಗಳಿಂದ ಘಟನಾ ದಿನಾಂಕದಂದು ಅರ್ಜಿದಾರಳ ಟೆಂಪೋ ವಾಹನದಲ್ಲಿ ಶ್ರೀಗಂಧದ ಹಸಿಮರದ ತುಂಡುಗಳನ್ನು ಆರೋಪಿಗಳು ಕಳ್ಳತನದಿಂದ ಸಾಗಾಣಿಕೆಯಾಗುತ್ತಿದ್ದ ಬಗ್ಗೆ ಸ್ಪಷ್ಟವಾದ ಸಾಕ್ಷ್ಯವನ್ನು ನುಡಿದಿದ್ದು, ಅವರ ಸಾಕ್ಷ್ಯವನ್ನು ಪ್ರಾಧಿಕಾರವು ಸಂಪೂರ್ಣವಾಗಿ ನಂಬಿರುತ್ತದೆ. ಇದನ್ನು ಅಲ್ಲಗೆಳೆಯಲು ವಾಹನ ಮಾಲೀಕರಾದ ಅರ್ಜಿದಾರರು ಪ್ರಾಧಿಕಾರಕ್ಕೆ ಯಾವುದೇ ಸಾಕ್ಷ್ಯವನ್ನು ಒದಗಿಸಿರುವುದಿಲ್ಲ. ಘಟನೆಯ ದಿನಾಂಕದಿಂದ ಯಾವ ರೀತಿಯಿಂದ ತನ್ನ ಸ್ವಾಧೀನದಿಂದ ತನ್ನ ವಾಹನವು ಆರೋಪಿಗಳ ಬಳಿ ಇತ್ತು ಎಂಬುದನ್ನು ಸ್ವತಹ ಅರ್ಜಿದಾರಳೇ ಪ್ರಾಧಿಕಾರಕ್ಕೆ ಒಪ್ಪುವಂತೆ ಸಾಕ್ಷಿ ನೀಡಬೇಕಾಗುತ್ತದೆ; ಆದರೆ ಪ್ರಸ್ತುತ ಪ್ರಕರಣದಲ್ಲಿ ಈ ರೀತಿ ಅರ್ಜಿದಾರಳು ಹಾಗೂ ಅವಳ ನ್ಯಾಯವಾದಿಗಳು ತಳೆದ ಧೋರಣೆಯ ಪ್ರಕಾರ ತನ್ನ ಮೇಲೆ ಅಂದರೆ ವಾಹನ ಮಾಲೀಕಳ ಮೇಲೆ ಪ್ರಕರಣ ನೊಂದಾಯಿಸದಿದ್ದರೆ ತನ್ನ ಜವಾಬ್ದಾರಿ ಮುಗಿಯಿತು ಅಂತಾ ಮಾತ್ರ ತಿಳಿದುಕೊಂಡಿದ್ದು ಕಂಡುಬರುತ್ತದೆ. ಅದೇ ರೀತಿ ಕರ್ನಾಟಕ ಅರಣ್ಯ ಕಾಯ್ದೆ ಕಲಂ 80ರ ಪ್ರಕಾರ ಕೂಡ ಪ್ರಸ್ತುತ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಶ್ರೀಗಂಧದ ಮರದ ತುಂಡುಗಳು ತಮಗೆ ಮಾತ್ರ ಸಂಬಂಧಿಸಿದ್ದವು ಅಂತಾ ಹೇಳುವ ಮತ್ತು ಅದನ್ನು ಸಿದ್ದಮಾಡುವ ಜವಾಬ್ದಾರಿ ಅವರದು ಇದ್ದರೂ ಸಹಿತ ಅದು ಈ ಪ್ರಕರಣದಲ್ಲಿಯ ಸಾಕ್ಷ್ಯಾಧಾರಗಳ ಮೂಲಕ ಸರ್ಕಾರಿ ಅರಣ್ಯ ಪ್ರದೇಶದಲ್ಲಿದ್ದ ಶ್ರೀಗಂಧದ ಮರಗಳನ್ನು ಕಡಿದು ತುಂಡುಗಳಾಗಿ ಮಾಡಿ ಬಚ್ಚಿಟ್ಟಿದ್ದವುಗಳನ್ನು ಆರೋಪಿಗಳು ಘಟನೆಯ ದಿನದಂದು ಸಾಗಾಣಿಕೆ ಮಾಡುತ್ತಿದ್ದ ವಿಷಯ ಸ್ಪಷ್ಟವಾಗಿ ಸಿದ್ದವಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ ಕಲಂ 71ಬಿ (2)ನೇದರ ಪ್ರಕಾರ ಮತ್ತು ನಮ್ಮದೆ ಉಚ್ಚ ನ್ಯಾಯಾಲಯದ ತೀರ್ಪುಗಳು ಕರ್ನಾಟಕ ಲಾ ಜರ್ನಲ್ 1987 (2) ಚಿಕ್ಕ ಟಿಪ್ಪಣಿ ಸಂಖ್ಯೆ:278 ಹಾಗೂ ಐ.ಎಲ್.ಆರ್. 1985 ಕರ್ನಾಟಕ ಪುಟ 2571 ನೇದ್ದವುಗಳ ಪ್ರಕಾರ ವಾಹನದ ಮಾಲೀಕರು ಪ್ರಾಧಿಕಾರಕ್ಕೆ ಅಭಿಯೋಜನದ ಸಾಕ್ಷಿಯನ್ನು ಅಲ್ಲಗೆಳೆಯುವ ರೀತಿಯಲ್ಲಿ ತಮ್ಮ ಸಾಕ್ಷಿ ನೀಡುವುದಲ್ಲದೆ, ತಾವು ಅಪರಾಧವನ್ನು ತಪ್ಪಿಸಲು ಸಾಕಷ್ಟು ಕ್ರಮವನ್ನು ತೆಗೆದುಕೊಂಡ ಬಗ್ಗೆ ಒಪ್ಪತಕ್ಕಂತಹ ಸಾಕ್ಷಿಯನ್ನು ಪ್ರಾಧಿಕಾರಕ್ಕೆ

ನೀಡಲೇಬೇಕಾಗುತ್ತದೆ ಮತ್ತು ಅಂತಹ ಸಂದರ್ಭದಲ್ಲಿ ಮಾತ್ರ ಮುಟ್ಟುಗೋಲು ಪ್ರಕರಣವನ್ನು ಕೈಬಿಟ್ಟು ಅರ್ಜಿದಾರರಿಗೆ ವಾಹನವನ್ನು ಬಿಟ್ಟುಕೊಡಬಹುದಾಗಿರುತ್ತದೆ. ಪ್ರಸ್ತುತ ಪ್ರಕರಣದಲ್ಲಿ ಅಂತಹ ಯಾವುದೇ ಸಂದರ್ಭಗಳು ಹಾಗೂ ಸಾಕ್ಷಿಗಳನ್ನು ಒದಗಿಸುವಲ್ಲಿ ವಾಹನ ಮಾಲೀಕ-ಅರ್ಜಿದಾರರು ಸಂಪೂರ್ಣವಾಗಿ ವಿಫಲಗೊಂಡಿರುವುದರಿಂದ ನಂದಗುಡಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:199:2002ರಲ್ಲಿ ವಶಪಡಿಸಿಕೊಂಡಿರುವ ಅರ್ಜಿದಾರರ ವಾಹನ ಹಾಗೂ ಅದರಲ್ಲಿ ದೊರೆತ ಶ್ರೀಗಂಧದ ಮರದ ತುಂಡುಗಳು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅರ್ಹವಾಗಿರುತ್ತವೆ ಅಂತಾ ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಮಾಡಬಯಸುತ್ತೇನೆ.

**ಆದೇಶ**

ಕರ್ನಾಟಕ ಅರಣ್ಯ ಕಾಯ್ದೆ ಕಲಂ 71ಎ ರಲ್ಲಿರುವ ಅಧಿಕಾರವನ್ನು ಚಲಾಯಿಸಿ ಅರ್ಜಿದಾರರ 407 ಟೆಂಪೋ ನಂಬರ್ ಕೆಎ03-6121 ನೇದ್ದನ್ನು ಹಾಗೂ ಅದರಲ್ಲಿ ಸಿಕ್ಕಿರುವ 178 ಕೆ.ಜಿ. ಶ್ರೀಗಂಧದ ಮರದ ತುಂಡುಗಳನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಈ ಆದೇಶವು 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ. ಈ ಆದೇಶವನ್ನು ಇಂದು ದಿನಾಂಕ:07.02.2004ರಂದು ಹೇಳಿ ಬರೆಯಿಸಿ ತಪ್ಪುಗಳನ್ನು ಸರಿಪಡಿಸಿ ತೆರೆದ ನ್ಯಾಯಾಲಯದಲ್ಲಿ ಪ್ರಕಟಿಸಲಾಗಿದೆ.

**ಎನ್.ಎಲ್. ಶಾಂತಕುಮಾರ್**
ಪ್ರಾಧಿಕೃತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

ಪಿ.ಆರ್.224

**ವಿಶೇಷ ಭೂಸ್ವಾಧೀನಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ**
**ಭೂಸ್ವಾಧೀನ ಕಾಯಿದೆ 1894ರ ಕಲಂ 16(2)ರ ಮೇರೆಗೆ**
**ಪ್ರಕಟಣೆ ಕ್ರಮಾಂಕ: ಎಲ್‌ಎಕ್ಯೂ/ಸಿಆರ್-52/96-97, ದಿನಾಂಕ:22ನೇ ಸೆಪ್ಟೆಂಬರ್, 2003**

ಕರ್ನಾಟಕ ಸರ್ಕಾರದವರು 1961ನೇ ಸಾಲಿನ ಕರ್ನಾಟಕ ಅಧಿನಿಯಮ ಕ್ರಮ ಸಂಖ್ಯೆ 17ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ (1894ರ ಸಾಲಿನ ಕೇಂದ್ರ ಅಧಿನಿಯಮ 1ರ) ಪ್ರಕರಣ 16(2)ರ ಮೇರೆಗೆ ಈ ಮೂಲಕ ಅನುಸೂಚಿಯಡಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದಿಂದ ನಿವೇಶನ ರಚಿಸಿ ಹಂಚಿಕೆ ಮಾಡುವ ಯೋಜನೆಗಾಗಿ ಅಧಿಕೃತವಾಗಿ ಸದರಿ ಭೂಸ್ವಾಧೀನ ಅಧಿನಿಯಮದ ಪ್ರಕರಣ 16(1)ರಂತೆ ವಶಪಡಿಸಿಕೊಳ್ಳಲಾಗಿದೆ ಎಂದು ಸಾರ್ವಜನಿಕರಿಗೂ ಹಾಗೂ ಸಂಬಂಧಿಸಿದವರ ತಿಳುವಳಿಕೆಗಾಗಿ ಅಧಿಸೂಚನೆ ನೀಡುವ ಮೂಲಕ ಪ್ರಕಟಿಸಲಾಗಿದೆ.

ಜಿಲ್ಲೆ: ಶಿವಮೊಗ್ಗ ಹೋಬಳಿ: ಕಸಬ (11)
ತಾಲ್ಲೂಕು: ಶಿವಮೊಗ್ಗ ಗ್ರಾಮ: ತೆವರಚಟ್ನಹಳ್ಳಿ

| ಕ್ರ. ಸಂ. | ಸ. ನಂ. | ವಿವರ | ವಿಸ್ತೀರ್ಣ ಎ. ಗುಂ | ಆಕಾರ | ಸ್ವಾಧೀನಕ್ಕೆ ಪಡೆದ ದಿನಾಂಕ |
|---|---|---|---|---|---|
| 1. | 80 ಪಿ | ಖುಷ್ಕಿ | 3-01 | 3-00 | |
| 2. | 85 ಪಿ | ಖುಷ್ಕಿ | 0-20 | 0-50 | |
| 3. | 86 ಪಿ | ಖುಷ್ಕಿ | 0-23 | 0-60 | |
| 4. | 88 ಪಿ | ತರಿ | 1-00 | 1-00 | |
| ಒಟ್ಟು | | | 5-04 | | |

ವಿಶೇಷ ಭೂಸ್ವಾಧೀನಾಧಿಕಾರಿಗಳು,
ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ.

ಪಿ.ಡಿ.8

**UNIVERSITY OF AGRICULTURAL SCIENCES, BANGALORE**
**Office of the Registrar , Naik Bhavan, GKVK, Bangalore-560 065**
**NOTIFICATION**
**No. R/D/2/Master Degree (Forestry)/2003-04, Dated:14th February, 2004**

**Sub:** Inclusion of Master's degree in Forestry (Silviculture & Forest Biology) in UAS(B)-Amendment to the Statute.

**Ref:** 1) No GS11/AUM/2003 dated: 3rd Feb. 2004 from the Under Secretary to Governor, Raj Bhavan, Bangalore-01.
2) Approval of the Vice-Chancellor, dated:14.02.2004.

The amendment to Statute 52, Chapter VII of the First Statute of the UAS, Bangalore 1964, providing provision for inclusion of "Master of science (Forestry) in Silviculture and Forest Biology" as Sub Clause 1(P), has been duly assented by the Chancellor of the University vide reference (1) cited above.

By Order
Registrar
University of Agricultural Sciences
G.K.V.K. Campus, Bangalore-560 065.

PD-9

**DEPARTMENT OF COMMERCIAL TAXES**

**OFFICE OF THE COMMERCIAL TAX OFFICER, 24TH CIRCLE, ABHAYA COMPLEX, RISALDAR STREET, SHESHADRIPURAM, BANGALORE-560 020**

**NOTIFICATION**

**No. CTO.24/Misc/1/2003-04, Dated:10th February, 2004**

In pursuance of the provisions contained in Rule 6 of The Central Sales Tax (Karnataka) Rules, 1957, it is hereby notified for General Information that the following declaration Form 'C' referred to Sub-section (4) of Section 8 of The Central Sales Tax Act, 1956 are declared to be invalid and void for the reasons that these eleven 'C' forms and Certificate of Registration are obtained fraudulently by the Proprietor of M/s Nakoda Novelties, No.263/264, Rajaguru Plaza, Old Taragu Peth, Bangalore-560 053 by furnishing the untrue and false information and also the evidences and documents enclosed to the application for grant of Certificate of Registration are conclusively proved to be fabricated.

**The details are as under**

| Nos (including Code No) of declaration forms misused | Name & address of the dealer whom declaration from is/are issued by the Dept. with date of issue | Registration No. of the dealer under CST Act 1956 | The address of the dealer whom the declaration is/are sent | Date of issue of forms by the dealer | Whether lost/ destroyed or stolen | Remarks |
|---|---|---|---|---|---|---|
| 1) Sl. Nos 2006405 to 2006409 (five) 2) 2006448 to 2006453 (six in number) Total 11 'C' forms | M/s Nakoda Novelties, No.263/264, Rajaguru Plaza, Old Taragupeth, Bangalore. | 75672121 | M/s Nakoda Novelties, No.263/264, Rajaguru Plaza, Old Taragu Peth, Bangalore. | Not Applicable | Obtained fraudulently | Certificate of registration is also cancelled |

**B.N. BIRADAR**

PR-225

Commercial Tax Officer, 24th Circle, Bangalore.

**ವಿಶೇಷ ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಪ್ರಿಲಿಮಿನರಿ ಅಧಿಸೂಚನೆ**

**ನಂ.ಕೆ.ಎಸ್.ಎ. ಸಿಆರ್ 2/03-04, ದಿನಾಂಕ:10ನೇ ಫೆಬ್ರವರಿ, 2004**

ಬೆಂಗಳೂರು ನಗರ ಕಾರ್ಪೊರೇಷನ್ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್ ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು, ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲೀ ಇರುವ ಗುಡಿಸಲು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಪ್ರಕಾರ ಹಾಗೂ ವಿಶೇಷ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ವಿಶೇಷ ಜಿಲ್ಲಾಧಿಕಾರಿಗಳು ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಮತ್ತು ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಒಳಗಾಗಿ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಷೆಡ್ಯೂಲ್**

ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಹೋಬಳಿ, ಬ್ಯಾಟರಾಯನಪುರ ನಗರಸಭೆ ವ್ಯಾಪ್ತಿಯಲ್ಲಿರುವ ರಾಮಚಂದ್ರಪುರ ಕೊಳಚೆ ಪ್ರದೇಶದ ಚೆಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಆಸ್ತಿ ಸಂಖ್ಯೆ | ವಿಸ್ತೀರ್ಣ (ಚ.ಅ.) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ರಾಮಚಂದ್ರಪುರ ಕೊಳಚೆ | ದೊಡ್ಡಚನ್ನಪ್ಪ ಎಂ. ನಂಜಪ್ಪ ನಗರಸಭೆ, ಬ್ಯಾಟರಾಯನಪುರ | ಗ್ರಾಮ ಠಾಣ | 0-26 | ರಾಮಚಂದ್ರ ಪುರ ಮುಖ್ಯ ರಸ್ತೆ | ಸ. ನಂ.29 | ಗ್ರಾಮ ಠಾಣದ ಉಳಿದ ಭಾಗ | ಸ. ನಂ. 29 |

ಸಿ. ಕೃಷ್ಣೇಗೌಡ
ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.248

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಡಿ.ಸಿ. ಕಾಂಪೌಂಡ್ ಧಾರವಾಡ ಜಿಲ್ಲೆ, ಧಾರವಾಡ**

**ಅಧಿಸೂಚನೆ**

**ಸಂಖ್ಯೆ:ಜಿಸಕ:ಸಿಬ್ಬಂದಿ4: ಸಿಆರ್43:2003-04 ದಿನಾಂಕ:21ನೇ ಜನವರಿ, 2004**

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ-56 ಯೋಮಸ-02(1) ದಿನಾಂಕ:18.07.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ, 2000 ಮತ್ತು 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ಜಿಲ್ಲಾ ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರ | ಅಪೀಲು ಪ್ರಾಧಿಕಾರ |
|---|---|---|
| ಜಿಲ್ಲಾ ಮಟ್ಟದಲ್ಲಿ | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಧಾರವಾಡ | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಧಾರವಾಡ |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ, ಈ ಕೆಳಗೆ ತಿಳಿಸಿರುವ ನಾಲ್ಕು ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ಜಿಲ್ಲಾ ಹಂತದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯು ಜಿಲ್ಲಾ ಪಂಚಾಯತ್ ವ್ಯಾಪ್ತಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು. ಅಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

1) ಕಛೇರಿ ಅಧೀಕ್ಷಕರು - 1 ಹುದ್ದೆ
2) ವಿ.ಘ.ಯೋ ಅಧೀಕ್ಷಕರು - 1 ಹುದ್ದೆ
3) ಪ್ರಥಮ ದರ್ಜೆ ಸಹಾಯಕರು - 3 ಹುದ್ದೆ
4) ದ್ವಿತೀಯ ದರ್ಜೆ ಸಹಾಯಕರು - 1 ಹುದ್ದೆ
5) ಬೆರಳಚ್ಚುಗಾರರು ಹಾಗೂ ಗುಮಾಸ್ತರು - 1 ಹುದ್ದೆ
6) ಬೆರಳಚ್ಚುಗಾರರು - 1 ಹುದ್ದೆ
7) ವಾಹನ ಚಾಲಕರು - 1 ಹುದ್ದೆ
8) 'ಡಿ' ನೌಕರರು - 2 ಹುದ್ದೆ

ಈ ಕಛೇರಿಯ ಅಧೀನದಲ್ಲಿ ಬರುವ ಸಂಸ್ಥೆಗಳ ವಿವರ ಈ ಕೆಳಗಿನಂತೆ ಇರುತ್ತದೆ.

1) ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ ಧಾರವಾಡ, ಹುಬ್ಬಳ್ಳಿ, ನವಲಗುಂದ, ಕಲಘಟಗಿ ಹಾಗೂ ಕುಂದಗೋಳ.
2) ಮೊರಾಜಿ ದೇಸಾಯಿ ಮಾದರಿ, ವಸತಿ ಶಾಲೆ, ಹುಬ್ಬಳ್ಳಿ ತಾಲ್ಲೂಕು ಧಾರವಾಡ.

ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಮೇಲ್ವಿಚಾರಣೆಯಲ್ಲಿ ಮೆಟ್ರಿಕ್ ನಂತರದ ವಸತಿ ನಿಲಯಗಳು, ಮೆಟ್ರಿಕ್ ಪೂರ್ವ ವಸತಿ ನಿಲಯಗಳು ಹಾಗೂ ಮಹಿಳಾ ಕಲ್ಯಾಣ ಕೇಂದ್ರಗಳು ಪರಿಶಿಷ್ಟ ಜಾತಿ ಹೊಲಿಗೆ ತರಬೇತಿ ಕೇಂದ್ರಗಳು, ಹಾಗೂ ವಸತಿ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ.

ಇದು ಅಲ್ಲದೇ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ಮಟ್ಟದಲ್ಲಿ ಪ.ಜಾತಿ. ಪ.ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಅನುದಾನಿತ ವಿದ್ಯಾರ್ಥಿನಿಲಯಗಳಿಗೆ ಧನಸಹಾಯ.
2) ಪರಿಶಿಷ್ಟ ಜಾತಿ: ಪರಿಶಿಷ್ಟವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಪ್ರೋತ್ಸಾಹ ಧನ.
3) ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಹಾಗೂ ಹೆಚ್ಚುವರಿ ಊಟ ವಸತಿ ವೆಚ್ಚ.
4) ಪುಸ್ತಕ ಭಂಡಾರ.

5) ಕಾಲೇಜು ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.
6) ಸ್ವಯಂ ಉದ್ಯೋಗಕ್ಕೆ ತರಬೇತಿ ಕೇಂದ್ರ.
7) ಕಾನೂನು ಪದವೀಧರರಿಗೆ ಶಿಷ್ಯವೇತನ.
8) ವಿಶೇಷ ಘಟಕ ಯೋಜನೆಯಡಿ ಧನಸಹಾಯ.
9) ಅಂತರ ಜಾತಿ ವಿವಾಹಿತರಿಗೆ ಪ್ರೋತ್ಸಾಹ ಧನ.
10) ಸವರ್ಣೀಯರಿಂದ ದೌರ್ಜನ್ಯಕ್ಕೆ ಒಳಗಾದ ಪ.ಜಾತಿ:ಪ.ವರ್ಗದವರಿಗೆ ಪರಿಹಾರ ಧನ.
11) ಸ್ವಯಂ ಸೇವಾ ಸಂಸ್ಥೆಗಳಿಗೆ ವಿದ್ಯಾರ್ಥಿನಿಲಯ ನಿರ್ಮಾಣಕ್ಕಾಗಿ ಸಹಾಯಧನ.

**2) ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಮೇಲೆ ವಿವರಿಸಿರುವಂತೆ ಶೀರ್ಷಿಕೆ (1)ರಲ್ಲಿ ತಿಳಿಸಿರುವ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಜಿಲ್ಲಾ ಮಟ್ಟದಲ್ಲಿ ಎಲ್ಲಾ ವಿಭಾಗಗಳ ವಿಷಯಗಳ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರವು ಧಾರವಾಡ ಜಿಲ್ಲೆಯಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಧಾರವಾಡ ಇವರಿಗೆ ಇರುತ್ತದೆ.

**ಅಧಿಕಾರಿಗಳ ಕರ್ತವ್ಯಗಳು:**

**1. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು:**

1. ಜಿಲ್ಲಾಧಿಕಾರಿಗಳಿಗೆ ಸಹಾಯಕರಾಗಿ ಕಾರ್ಯನಿರ್ವಹಿಸುವುದು.
2. ಪರಿಶಿಷ್ಟಜಾತಿ: ಪರಿಶಿಷ್ಟವರ್ಗದ ಜನರ ಕಲ್ಯಾಣ ಕಾರ್ಯಕ್ರಮಗಳ ಕುರಿತು ಜಿಲ್ಲೆಯ ಎಲ್ಲಾ ಇಲಾಖೆಯ ಮುಖ್ಯಸ್ಥರೊಂದಿಗೆ ಸಹಕರಿಸುವುದು.
3. ಕರಡು ಯೋಜನೆ ತಯಾರಿಸುವುದು.
4. ತಿಂಗಳಲ್ಲಿ 15 ದಿನಗಳು ಪ್ರವಾಸ ಕೈಗೊಂಡು, ಇಲಾಖೆಯ ಎಲ್ಲಾ ಸಂಸ್ಥೆಗಳ ಪ್ರಗತಿ ಪರಿಶೀಲನೆ ಕುರಿತು ಕನಿಷ್ಠ 10 ದಿವಸ ವಾಸ್ತವ್ಯ ಮಾಡುವುದು.

**ಹೆಚ್ಚುವರಿ ಕರ್ತವ್ಯಗಳು:**

1. ಪರಿಶಿಷ್ಟ ಜಾತಿ: ಪರಿಶಿಷ್ಟವರ್ಗಗಳ ಜನರ ಮೇಲೆ ನಡೆಯುವ ದೌರ್ಜನ್ಯ ಹಾಗೂ ಅಸ್ಪೃಶ್ಯತೆ ಕುರಿತು ಜಿಲ್ಲೆಯ ಪೊಲೀಸ್ ಇಲಾಖೆಯನ್ನು ಸಂಪರ್ಕಿಸಿ ಮಾಹಿತಿ ಪಡೆದು ಸೂಕ್ತ ಕ್ರಮ ಜರುಗಿಸುವುದು.
2. ಜಿಲ್ಲೆಯ ಪ್ರತಿಯೊಂದು ಹಳ್ಳಿಗೂ ವರ್ಷದಲ್ಲಿ ಒಮ್ಮೆಯಾದರು ಸಂದರ್ಶಿಸುವುದು.
3. ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಗಳನ್ನು ಹಾಗೂ ಇಲಾಖಾ ಸಂಸ್ಥೆಗಳನ್ನು ತಪಾಸಣೆ ಕೈಗೊಳ್ಳುವುದು.
4. ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳನ್ನು ತಪಾಸಣೆ ಮಾಡಿ ತಪಾಸಣಾ ವರದಿಗಳನ್ನು ಸಲ್ಲಿಸುವುದು ಹಾಗೂ ಸೂಕ್ತ ನಿರ್ವಹಣೆಗಾಗಿ ಸೂಚನೆ ನೀಡುವುದು.
5. ಶಿಕ್ಷಣ ಹಾಗೂ ಇತರೆ ಸಂಸ್ಥೆಗಳಲ್ಲಿ ಪರಿಶಿಷ್ಟಜಾತಿ:ಪರಿಶಿಷ್ಟವರ್ಗದವರ ಮೀಸಲಾತಿ ಹಾಗೂ ಶೈಕ್ಷಣಿಕ ಸಂಸ್ಥೆಗಳಲ್ಲಿ ಪರಿಶಿಷ್ಟಜಾತಿ:ಪರಿಶಿಷ್ಟವರ್ಗಗಳ ಪ್ರವೇಶ ಕುರಿತು ಮೀಸಲಾತಿ ನಿಯಮ ಅನುಸರಿಸುವ ಬಗ್ಗೆ ತಪಾಸಣೆ ನಡೆಸಿ ಸೂಕ್ತ ನಿರ್ದೇಶನ ನೀಡುವುದು.
6. ಜಿಲ್ಲೆಯಲ್ಲಿ ಜರುಗುವ ಇಲಾಖೆಯ ಪ್ರಗತಿ ಪರಿಶೀಲನಾ ಸಭೆಗಳಿಗೆ ಹಾಜರಾಗುವುದು ಹಾಗೂ ಮಾಹಿತಿ ಸಲ್ಲಿಸುವುದು.
7. ಪ್ರತಿ ತಿಂಗಳು ಅನುದಾನ ಹಾಗೂ ಖರ್ಚುಗಳ ತಖ್ತೆ ತಯಾರಿಸಿ ಸಲ್ಲಿಸುವುದು.
8. ಪರಿಶಿಷ್ಟಜಾತಿ: ಪರಿಶಿಷ್ಟವರ್ಗಗಳ ಜನರ ದೂರು ಹಾಗೂ ಸಮಸ್ಯೆಗಳನ್ನು ಪರಿಹರಿಸಲು ಪ್ರಾಮಾಣಿಕ ಪ್ರಯತ್ನ ಮಾಡುವುದು, ಇತ್ಯಾದಿ.

**3) ಕಛೇರಿಯ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

1. ಕಛೇರಿಯ ಸಿಬ್ಬಂದಿ ವರ್ಗದವರು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ವ್ಯಾಪ್ತಿಯಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವರು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕ ಅಧಿಕಾರಿಗಳಿಗೆ ಸ್ವೀಕೃತಿ ಪಡೆದು ನೀಡಲಾಗುವುದು.

ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ, ನಿರ್ವಾಹಕರು ಕಛೇರಿ ಕೈಪಿಡಿ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಹಾಗೂ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವುದು.

**4) ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1. ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.

3. ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕರ ಮೇಜು ತಪಾಸಣೆ ಕಾರ್ಯ.
4. ಇಲಾಖಾ ಸಂಸ್ಥೆಗಳ ಸಿಬ್ಬಂದಿ ವರ್ಗದವರಿಗೆ ಕಾರ್ಯಾಗಾರ ನಡೆಸುವುದು.
5. ಸರ್ಕಾರವು: ಮೇಲಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತಗತಿಯಲ್ಲಿ ಪಾಲಿಸುವುದು.
6. ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

**5) ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1. ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು ಆದೇಶಗಳು ವಾರ್ಷಿಕ ಸಂಕಲನ ಕ್ರಿಯಾಯೋಜನೆ ಹಾಗೂ ಕಿರುಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2. ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕಾಧಿಕಾರಿಗಳನ್ನು ನೇಮಿಸಿರುವುದು.
3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರೀತ್ಯಾ ರಾಜ್ಯ ಮಟ್ಟದಲ್ಲಿ ಜಂಟಿ ನಿರ್ದೇಶಕರು (ವಿ.ಘ.ಯೋ) ಯವರನ್ನು ಸಕ್ಷಮ ಪ್ರಾಧಿಕಾರವಾಗಿ ಹಾಗೂ ಸಮಾಜ ಕಲ್ಯಾಣ ಆಯುಕ್ತರವರನ್ನು ಮೇಲ್ಮನವಿ ಪ್ರಾಧಿಕಾರವನ್ನಾಗಿ, ಹಾಗೂ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಸಕ್ಷಮ ಪ್ರಾಧಿಕಾರವನ್ನಾಗಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ರವರನ್ನು ಮೇಲ್ಮನವಿ ಪ್ರಾಧಿಕಾರಿಯಾಗಿ ಅದೇ ರೀತಿ ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.
4. ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ಧಾರವಾಡ.

ಪಿ.ಆರ್.227

**KARNATAKA POWER TRANSMISSION CORPORATION LTD**
**No. (S.E) (EI)/MWDS/F/EE(0)/F110/2589-91, Dated:11th August, 2000**

The Karnataka power Transmission Corporation Ltd., have formulated a Scheme under 28(A) of the Electricity Supply Act 1948 and the same is herewith published in persuance of Section 29(ii) of the said Act for information of the licence and any other persons interested. Particulars of the scheme are as follows:

| | | |
|---|---|---|
| 1. | Name of the scheme: | Construction of 110KV DC transmission line from 220/110KV Khemar station to 110KV Manipal sub-station to a distance of 30 KMs. |
| 2. | Salient feature: | To improve power and voltage conditions in and around Manipal and to meet the growing power demand in Udupi Tq. |
| 3. | Areas passing through: | (Limits of the following villages)<br>1. Khemar, (2) Doopadakatte, (3) Bajekal (4) Kalya (5) Halekatte<br>(6) Kuntadi (7) Kaudur (8) Palli (9) Ninjur (10) Kattingere (11) Vorwadi<br>(12) Padubettu, (13) Pernankila, (14) Mudubelle (15) Gundepade<br>(16) Marne (17) Pura, (18) Kodangala (19) Karvalu (20) Alevoor,<br>(21) Kukkikatte, (22) Manchi (23) Indraligudde (24) Badagubettu<br>(25) Manipal. |
| 4. | Approximate cost: | Rs. 2.84 Crores |

The Corporation shall have and shall exercised all powers which the telegraph authorities possess under Part III of the Indian Telegrapha Act 1985 (18 of 1985) for carrying out the above Scheme. Objections to the above scheme if any should be sent to the Secretary, KPTCL., Bangalore within two months from the date of Publication of the Notification for consideration of the Corporation.

Secretary,
Karnataka Power Transmission Corporation Ltd.,

PD-13

**AEROSPACE DESIGN ENGINEERS PRIVATE LIMITED**
**Registered Office:**
**No.3, Airport Road, N.R. Colony, Murugeshapalya, Bangalore-560 017**
**NOTICE**

Notice is hereby given that pursuant to Section 484 and other applicable provisions if any, of the Companies Act, 1956, the Extra ordinary General Meeting of the shareholders of the Company will be held at The Registered office of the Company, Bangalore on Wednesday the 21st day of April 2004 at 9.30 A.M., resolved to windup the company as "Members Voluntary Winding up" and to appoint B.S. Srinivasa Rao as the liquidator of the Company.

Place: Bangalore
Date:03.03.2004

**B.S. SRINIVASA RAO**
CHAIRMAN/ LIQUIDATOR.

PD-14